





(ಅವತೀರ್ಣ - ಮಕ್ಕಾದಲ್ಲಿ)

| | |
|---|---|
| ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ | بِسْمِ اللّٰهِ الرَّحْمٰنِ الرَّحِيْمِ |
| 1. ಪ್ರಕಾಶಮಯ ಹಗಲಿನಾಣೆ- | وَالضُّحٰى ۝١ |
| 2. ಮತ್ತು ರಾತ್ರಿಯಾಣೆ - ಅದು ಪ್ರಶಾಂತವಾಗಿ ಆವರಿಸುವಾಗ- | وَالَّيْلِ اِذَا سَجٰى ۝٢ |
| 3. (ಸಂದೇಶವಾಹಕರೇ) ನಿಮ್ಮ ಪ್ರಭು ನಿಮ್ಮನ್ನು ಖಂಡಿತ ಕೈ ಬಿಡಲಿಲ್ಲ ಮತ್ತು ಅವನು ಕೋಪಿಸಲೂ ಇಲ್ಲ. | مَا وَدَّعَكَ رَبُّكَ وَمَا قَلٰى ۝٣ |
| 4. ಮತ್ತು ಖಂಡಿತವಾಗಿಯೂ ಅನಂತರದ ಕಾಲಘಟ್ಟವು ನಿಮ್ಮ ಪಾಲಿಗೆ ಮುಂಚಿನ ಕಾಲಘಟ್ಟಕ್ಕಿಂತ ಉತ್ತಮವಾಗಿರುವುದು. | وَلَلْاٰخِرَةُ خَيْرٌ لَّكَ مِنَ الْاُوْلٰى ۝٤ |
| 5. ಸದ್ಯದಲ್ಲೇ ನಿಮ್ಮ ಪ್ರಭು, ನೀವು ಸಂತುಷ್ಟರಾಗುವಷ್ಟನ್ನು ನಿಮಗೆ ಕೊಡುವನು. | وَلَسَوْفَ يُعْطِيْكَ رَبُّكَ فَتَرْضٰى ۝٥ |
| 6. ಅವನು ನಿಮ್ಮನ್ನು ಅನಾಥನಾಗಿ ಕಂಡು ಆಶ್ರಯವನ್ನು ಒದಗಿಸಲಿಲ್ಲವೇ? | اَلَمْ يَجِدْكَ يَتِيْمًا فَاٰوٰى ۝٦ |
| 7. ಮತ್ತು ನಿಮ್ಮನ್ನು ಸನ್ಮಾರ್ಗ ವರಿಯದವರಾಗಿ ಕಂಡು ಮಾರ್ಗದರ್ಶನ ಮಾಡಲಿಲ್ಲವೇ? | وَوَجَدَكَ ضَآلًّا فَهَدٰى ۝٧ |
| 8. ನಿಮ್ಮನ್ನು ನಿರ್ಗತಿಕನಾಗಿ ಕಂಡು ಸ್ಥಿತಿವಂತನಾಗಿ ಮಾಡಲಿಲ್ಲವೇ? | وَوَجَدَكَ عَآئِلًا فَاَغْنٰى ۝٨ |
| 9. ಆದುದರಿಂದ ಅನಾಥನ ಮೇಲೆ ಕಾಠಿಣ್ಯ ತೋರಬೇಡಿರಿ. | فَاَمَّا الْيَتِيْمَ فَلَا تَقْهَرْ ۝٩ |
| 10. ಮತ್ತು ಯಾಚಕನನ್ನು ಜರೆಯಬೇಡಿರಿ. | وَاَمَّا السَّآئِلَ فَلَا تَنْهَرْ ۝١٠ |
| 11. ಮತ್ತು ನಿಮ್ಮ ಪ್ರಭುವಿನ ಅನುಗ್ರಹವನ್ನು ಪ್ರಕಟಪಡಿಸಿರಿ. | وَاَمَّا بِنِعْمَةِ رَبِّكَ فَحَدِّثْ ۝١١ ع ١٨ |